# ಭಜಮುದ್ವೇಶಂ! ಮೂಢಮತೇ!

## (ಮಂದಮಾನವಾ ಭಜಿಸು ಗೋವಿಂದನಾಮ)



ರಚನೆ

**ಜೆ. ಎಚ್. ಬಿ. ಆಚಾರ್ಯ**

ಬೆಂಗಳೂರು

# ವಿಜ್ಞಾಪನೆ

ಈಗಾಗಲೇ ಸಂಸ್ಕೃತದಲ್ಲಿ "ಭಜಮಧ್ವೇಶಂ" ಎರಡು ಕೃತಿಗಳು ಹೊರಬಂದಿವೆ. ಇದು ಕನ್ನಡ—ಅನುವಾದವಲ್ಲ—ವಿಭಿನ್ನ ರೀತಿಯಲ್ಲಿರುವ ಸ್ವತಂತ್ರ ರಚನೆ ಶ್ರೀಹರಿವಾಯು ಗುರುಗಳ ಪ್ರೀತಿಗಾಗಿ ಈ ರಚನೆ ಸಜ್ಜನರ ಸಂತೋಷವೇ ಇದಕ್ಕೆ ಫಲ !

ಸಾಮ್ರಾಟ್ ಪೋಷಕರಿಗೆ ಕೃತಜ್ಞತೆಯ ಧನ್ಯವಾದಗಳು.

ವಿನಾಯಕ ಚತುರ್ಥಿ

19-9-93 ಬೆಂಗಳೂರು

ವಿದ್ವದ್ವಿಧೇಯ

ಭೀಮಕವಿ

## ಭಜಮಧ್ವೇಶಂ !   ಮೂಢಮತೇ

ಹರಿಸರ್ವೋತ್ತಮ–ಹರಿಸರ್ವೋತ್ತಮ
ಹರಿಸರ್ವೋತ್ತಮ–ಎನುಮನವೇ ||
ಹರಿಪರಮಾತ್ಮನ–ಪುರವನು ತೋರುವ
ಗುರುಪವಮಾನನೆ–ನಮ್ಮ ಗುರು || 1

ತರತಮತತ್ತ್ವವ–ಧರೆಯಲಿ ಸಾರಿದ
ಗುರುಮಧ್ವಾರ್ಯರ–ಮರೆಯದಿರೋ
ಹರಿಕಥೆ ಕೇಳುವೆ–ಗುರು ಕಥೆ ಪಾಡುವೆ
ಹರಿಪುರಸೇರಲು–ಹಾದಿ ಇದೂ ||
ಮಂದ ಮಾನವಾ ! ಭಜಿಸು ಗೋವಿಂದ ನಾಮ ! 2

ಪರಶಿವ ಶಂಕರ–ಮರುತಗೆ ಕಿಂಕರ
ಸರಿಸಮನೆಂಬುದ ಸ್ಮರಿಸದಿರೋ ||
ವಿರಹವ ನರಿಯದ ವರಮಹಲಕ್ಷ್ಮಿ
ಹರಿನಾರಾಯಣರನು ಆರಾಧಿಸುವೇ 3

ಗುರುಮಧ್ವಾರ್ಯರ–ಚರಿತಾಮೃತವನು
ಅರಿತು ಪಠಿಸುವೇ–ಅನುದಿನದಲ್ಲಿ
ಹರಿದಿನದಲ್ಲೀ–ಹರಿಯನು ಭಜಿಸುವೆ
ಮರುದಿನ ಉಣ್ಣುವೆ–ಮಧುರಾಹಾರಾ ||
ಮಂದ ಮಾನವಾ ! ಭಜಿಸು ಗೋವಿಂದನಾಮ ! 4

ಹರಿಸಂತೋಷಕೆ–ಅನ್ನವ ಹಂಚುವೆ
ವರದರಾಜನಿಗೆ ವಂದಿಸುವೇ
ತಿರುಮಲರಾಯನ ಚರಣಕ್ಕೆರಗುವೆ
ಪರಿಮಳ ರಾಯರ ಪಾದಸ್ಮರಿಸುವೇ ॥ 5

ಅನ್ನಬ್ರಹ್ಮನ–ಆರಾಧಿಸುವೇ
ನಾದಬ್ರಹ್ಮನ–ಪಾದಕ್ಕೆರಗುವೆ
ಕಾಂಚನ ಬ್ರಹ್ಮನ–ಕಣ್ತುಂಬ ಕಂಡು
ಮಂಚಾಲೆ ರಾಯರ ಮಹಿಮೆ ಹಾಡುವೇ ॥
ಮಂದ ಮಾನವಾ ! ಭಜಿಸು ಗೋವಿಂದನಾಮ ! 6

ಮೋದಕ ಹಸ್ತನ–ಮೊದಲು ಪೂಜಿಸಿ
ಬಾದರಾಯಣನ–ಪಾದಕ್ಕೆರಗುವೆ
ಮಧ್ವವಿಜಯವಾ–ಮತ್ತೆ ಪಠಿಸುವೇ
ಮುದ್ದು ಪ್ರಹ್ಲಾದಗೆ–ಎದ್ದು ನಮಿಸುವೇ ‖ 7

ಏಳುದಿನಗಳಾ–ಕಥೆಯನು ಕೇಳಿ
ಬಾಲಮುಕುಂದಗೆ–ವಂದಿಸುವೇ
ಪರಿಮಳದೊಂದಿಗೆ–ಸುಧೆಯ ಕುಡಿಯುವೇ
ಹರಿಪುರ ಸೇರಲು–ಹಾದಿ ಇದೂ ‖
ಮಂದಮಾನವಾ ! ಭಜಿಸು ಗೋವಿಂದನಾಮ ! 8

ರಂಗನ ನೆನೆಯುತ-ಗಂಗೆಯ ಬಡಿಸುವೆ
ಮಂಗಳ ಮೂರುತಿ-ಮಧ್ವೇಶಗೆರಗುವೆ
ಭೂವೈಕುಂಠಕೆ-ಬರುವೆನು ಹರಿಯೇ
ಆ ವೈಕುಂಠವ-ತೋರಿಸು ದೊರೆಯೇ ‖ 9

ಭೀಮನ ನೆನೆದರೆ-ಭೀತಿಮಾಯವೋ
ಕಾಮಿತ ಲಭಿಪುದು-ಕಂಸಾರಿ ಆಣೆ
ರಾಮಮಂತ್ರವಾ-ಪ್ರೇಮದಿ ಜಪಿಸುವ
ಉಮಾಮಹೇಶಾ-ಉದ್ಧಾರಮಾಡೋ ‖
ಮಂದಮಾನವಾ ! ಭಜಿಸು ಗೋವಿಂದನಾಮ ! 10

ಹನುಮನ ಮತವೇ-ಹರಿಮತವೆಂಬರು
ಮನದ ಕಲ್ಮಷ-ಮಾಯವಾಗಲೀ
ಪರಮತಗಳನು-ದೂಷಿಸದಂತೇ
ಹರಿಸರ್ವೋತ್ತಮ-ಎನು ಮನವೇ ‖ 11

ಸಾಸಿರನಾಮವ-ಸರಸರ ಪಠಿಸುವೆ
ವಾಸವವಂದ್ಯಗೆ-ವಂದಿಸುವೇ
ಯಾತನೆ ಕಳೆಯುವ-ಗೀತೆಯ ತಿಳಿಯುವೆ
ಮಾತರಿಶ್ವಗೇ-ವಂದಿಸುವೇ ‖
ಮಂದಮಾನವಾ ! ಭಜಿಸು ಗೋವಿಂದನಾಮ ! 12

ದೋಷವಿದೂರಾ ! ದುರ್ಗಾರಮಣಾ !
ಪೋಷಣೆಮಾಡೋ-ಕರುಣಾಭರಣಾ !
ಸುಖದ ಸುರೂಪಾ ! ಸುಂದರ ರೂಪಾ
ಸುಖಮುನಿ ಕಂಡಿಹ ಶುಭರೂಪಾ !
ಮಂದಮಾನವಾ ! ಭಜಿಸು ಗೋವಿಂದನಾಮ ! 13

ಶುದ್ಧ ಬುದ್ಧಿಯಾ ಭೀಮನ ನೆನೆದು
ಜಯಮುನಿರಾಯರ ಸ್ಮರಣೆಯ ಮಾಡಿ
ವಿಜಯರಾಯರಾ ವಿಜಯವ ಕೇಳಿ
ಭಜ ಮಧ್ವೇಶಂ–ಬರೆದಿಹೆ ಕೃಷ್ಣಾ ॥ 14

॥ ಶ್ರೀ ಕೃಷ್ಣಾರ್ಪಣಮಸ್ತು ॥

ರಮೆಯು ರಮಣನೇ ಸರ್ವೋತ್ತಮನು
ಭಾರತಿ ರಮಣನೆ ಜೀವೋತ್ತಮನು
ಪಾರ್ವತಿ ರಮಣಾ ! ವೈಷ್ಣವೋತ್ತಮಾ
ಭಾಗವತೋತ್ತಮಾ ಪ್ರಹ್ಲಾದರಾಜಾ ।
ಭಜಮಧ್ವೇಶಂ ! ಎನುಮನವೇ ॥ 15

ದಾನ ಧರ್ಮಗಳು ದಾರಿ ದೀಪಗಳು
ಜ್ಞಾನ ಭಕುತಿಯೋ ಸೋಪಾನಗಳು
ಮಧ್ವೇಶನಗರಕೆ ಮಾರ್ಗವಿದೂ !
ವರಕವಿ ಭೀಮನ ವಾಣಿ ಇದೂ ॥ 16

—ಮಧ್ವೇಶಾರ್ಪಿತಮಸ್ತು—

ಸಾಮ್ರಾಟ್ ಪೋಷಕರು

ಕೆ. ಆರ್. ಲಕ್ಷ್ಮಣರಾಯರು

25/1, ಆರ್. ಕೆ. ಸ್ಟ್ರೀಟ್, ಶೇಷಾದ್ರಿಪುರಂ
ಬೆಂಗಳೂರು–20

ಪ್ರತಿಗಳಿಗೆ

**J. H. SUMITRA BAI**
No. 15, 12th, Cross, 9th Main S. P. Extn.
Malleswsram, Bangalore-3

---

Bhaja Madhvesham Moodhamate

---